**ಕರೋನಾ ವೈರಸ್ ಬಗ್ಗೆ ಮಕ್ಕಳ ಜೊತೆಗೆ ಮಾತುಕತೆ: ಕೆಲವು ಸಂಪನ್ಮೂಲಗಳು**
**–ಶೆಫಾಲಿ ತ್ರಿಪಾಠಿ ಮೆಹ್ತಾ**

.....................................................

ಮೂರು ವರ್ಷದ ಮಗುವೊಂದು ಮತ್ತೊಂದು ಮಗುವಿಗೆ "ಕರೋನಾ" ಬಗ್ಗೆ ಹೇಳುತ್ತಿತ್ತು. ಕಣ್ಣುಗಳನ್ನು ಅರಳಿಸಿಕೊಂಡು "ಆಟದ ಮೈದಾನದ ಬಳಿ ಯಾವುದೇ ಕಾರಣಕ್ಕೂ ಹೋಗಬೇಡ. ಏಕೆಂದರೆ "ಅಲ್ಲಿ 'ಕರೋನಾ' ಇದೆ" ಎಂದು ಎಚ್ಚರಿಸುತ್ತಿದ್ದಳು. ಇನ್ನೊಂದು ದಿನ ವ್ಯಕ್ತಿಯೊಬ್ಬ ಮುಖಕವಚ ಧರಿಸದೆ ಬಳಿಗೆ ಬಂದಾಗ, ಅಳಲಾರಂಭಿಸಿದ್ದಳು. ಪೋಷಕರು ಆಕೆಯ ಮನಸ್ಸಿನಲ್ಲಿ ಭೀತಿಯನ್ನು ತುಂಬಿದ್ದರಿಂದ, ಹೊರಗೆ ಹೋದಾಗ ಇಲ್ಲವೇ ತಾನೊಬ್ಬಳೇ ಇದ್ದಾಗಲೂ ಮೈಮರೆಯುತ್ತಿರಲಿಲ್ಲ. ಪೋಷಕರ ಕಾಳಜಿಯನ್ನು ಅರ್ಥ ಮಾಡಿಕೊಳ್ಳಬಹುದು: ಆದರೆ, ನಾವು ವಾಸ್ತವದ ಸೂಕ್ಷ್ಮ ಸನ್ನಿವೇಶಗಳನ್ನು ಬೆದರುಗೊಂಬೆಯಾಗಿಸಿದಾಗ, ಮಕ್ಕಳು ತಾರ್ಕಿಕ ಪರಿಹಾರಗಳನ್ನು ಕಂಡುಕೊಳ್ಳಲು ಹಾಗೂ ತಮ್ಮ ಭಯ–ಆತಂಕವನ್ನು ವ್ಯಕ್ತಪಡಿಸಲು ಆಗದೆ ಇರುವುದರಿಂದ, ಅವರನ್ನು ಮಾನಸಿಕ ಹಾಗೂ ಭಾವನಾತ್ಮಕ ಹಾನಿಗೆ ಒಳಪಡಿಸುತ್ತೇವೆ. ಸಾಂಕ್ರಾಮಿಕ ರೋಗದ ಕುರಿತು ವಯಸ್ಸಿಗೆ ಸೂಕ್ತವಾದ ಮಾಹಿತಿಯನ್ನು ನೀಡುವುದು ಮತ್ತು ಅದು ಹೇಗೆ ಹರಡುತ್ತದೆ, ಹಾಗೂ ಮಕ್ಕಳಿಗೆ ಪ್ರಶ್ನೆಗಳನ್ನು ಕೇಳಲು ಮತ್ತು ತಮ್ಮ ಭಾವನೆಗಳನ್ನು ಹಂಚಿಕೊಳ್ಳಲು ಪ್ರಬುದ್ಧರು ಅಂದರೆ, ಪೋಷಕರು, ಶಿಕ್ಷಕರು ಹಾಗೂ ಹಿರಿಯ ಸೋದರ–ಸೋದರಿಯರು ಅವಕಾಶ ನೀಡುವುದು ಸೂಕ್ತ ಮಾರ್ಗವಾಗಲಿದೆ.

ಇಲ್ಲಿ ಕತೆಗಾರರು, ಶಿಕ್ಷಕರು ಹಾಗೂ ಪೋಷಕರು ಮಕ್ಕಳಿಗೆ ಕರೋನಾ ಸಾಂಕ್ರಾಮಿಕದ ಬಗ್ಗೆ ತಿಳಿಸಿಕೊಡಲು ಸೃಷ್ಟಿಸಿದ ಸಾಹಿತ್ಯದ ವಿಶ್ಲೇಷಣೆ ಇದೆ. ಶಿಕ್ಷಕರು ಇದರಿಂದ ಮಾಹಿತಿ ಪಡೆದುಕೊಂಡು, ಮಕ್ಕಳ ಸ್ವಂತದ ಸಂದರ್ಭಕ್ಕೆ ಅನುಗುಣವಾದ ಕತೆಗಳನ್ನು ಸೃಷ್ಟಿಸಬಹುದು. ಅವರು ತರಗತಿಯಲ್ಲಿ ಕತೆ ಹೇಳುವಿಕೆ ಅಥವಾ ಬೊಂಬೆಗಳ ಬಳಕೆ ಹಾಗೂ ಪಾತ್ರ ನಿರ್ವಹಣೆಯಂಥ ಉತ್ತೇಜಕ ಮಾರ್ಗಗಳ ಮೂಲಕ ಇವನ್ನು ಮಕ್ಕಳಿಗೆ ತಲುಪಿಸಬಹುದು.

* ಪ್ರಥಮ್ ಬುಕ್ಸ್‌ನ ಸ್ಟೋರಿ ವೀವರ್ ಸಮುದಾಯ: ಪ್ರತಿಕೂಲ ಸನ್ನಿವೇಶದಲ್ಲಿರುವ ಮಕ್ಕಳ ಮಾತೃಭಾಷೆಗಳಲ್ಲಿ ಪುಸ್ತಕಗಳನ್ನು ತಲುಪಿಸಲು ನಿರ್ಮಿಸಿದ ಈ ವೇದಿಕೆಯಲ್ಲಿ ಬಹುತೇಕ ಭಾರತೀಯ ಭಾಷೆಗಳು (26) ಮತ್ತು ವಿದೇಶದ ಭಾಷೆಗಳಲ್ಲಿ ಕತೆಗಳು ಲಭ್ಯವಿವೆ.

ದ ನಾವೆಲ್ ಕರೋನಾ ವೈರಸ್: ವಿ ಕ್ಯಾನ್ ಸ್ಟೇ ಸೇಫ್. ಪಠ್ಯ ಮತ್ತು ಚಿತ್ರಗಳು: ದೀಪಾ ಬಲ್ಸಾವರ್ ಮತ್ತಿತರರು. ಲಿಂಕ್: https://storyweaver.org.in/stories/128585-the-novel-coronavirus-we-can-stay-safe.

ಕೋವಿಡ್–19 ಅನ್ನು ತಡೆಯಲು ಕೈಗಳನ್ನು 20 ಸೆಕೆಂಡ್‌ಗಳ ಕಾಲ ತೊಳೆಯಬೇಕು ಎನ್ನುವುದು ಉತ್ತಮ ವಿಧಾನ. ಆದರೆ, ಮಗುವೊಂದು 20 ಸೆಕೆಂಡ್‌ನ್ನು ಹೇಗೆ ಲೆಕ್ಕ ಮಾಡುತ್ತದೆ? ಈ ಪುಸ್ತಕವು ಎಲ್ಲಾ ಮಕ್ಕಳು ಇಷ್ಟಪಡಬಹುದಾದ ತಮಾಷೆಯ ಪರಿಹಾರಗಳನ್ನು ನೀಡುತ್ತದೆ. ಅಜ್ಜಿಯಿಂದ ಹಿಡಿದು ಮಕ್ಕಳು ಸೇರಿದಂತೆ ಹಲವು ಪಾತ್ರಗಳು

ಕೋವಿಡ್ ತಡೆಗೆ ಬಳಸುವ ಕ್ರಮಗಳ ಬಗ್ಗೆ, ಕೈ ತೊಳೆಯುವುದು, ಸೀನಿದಾಗ ತೋಳನ್ನು ಅಡ್ಡ ಹಿಡಿಯುವುದು, ಸುರಕ್ಷಿತ ಅಂತರವನ್ನು ಕಾಯ್ದುಕೊಳ್ಳುವುದು ಇತ್ಯಾದಿ ಕ್ರಮಗಳ ಬಗ್ಗೆ ಮಾತನ್ನಾಡುತ್ತಾರೆ. ಶಾಲೆಗಳು ಮುಚ್ಚಿರುವುದು ಹಾಗೂ ಜನರು ಮನೆಯೊಳಗೆಯೇ ಇರುವಂತಾಗಿರುವುದು ಮತ್ತು ಅವರ ಒಂಟಿತನ ಇತ್ಯಾದಿ ಬಗ್ಗೆಯೂ ಮಾತಾಡುತ್ತಾರೆ. ಒಂದು ಮತ್ತು ಎರಡನೇ ತರಗತಿ ಮಕ್ಕಳಿಗೆ ಉತ್ತಮ ಸಂಪನ್ಮೂಲ.

ಲೈಟ್ಸ್ ಇನ್ ದ ಹಾರ್ಟ್ ಟೂ! ಲೇಖಕಿ–ರೇಖಾ ಕುಮಾರ್, ಚಿತ್ರಗಳು–ಅಲಿನಾ ಅಫವ್ಯಯ್ ಮತ್ತಿತರರು ಲಿಂಕ್:. https://storyweaver.org.in/stories/127894-lights-in-the-hearts-too
ಪ್ರಾಣಿಗಳ ಬಗ್ಗೆ ಕರುಣೆ ತೋರಿಸುವುದು, ಆಹಾರ ನೀಡುವುದು ಮತ್ತು ಪಾಲನೆ ಮಾಡುವುದು ಮತ್ತು ಅನಾಮಿಕ ವೈರಸ್‌ನ ಭಯದಿಂದ ಪ್ರಾಣಿಗಳನ್ನು ತೊರೆಯಬಾರದು ಎನ್ನುವ ಸಂದೇಶ ನೀಡುವ ಸರಳ ಕತೆ. ಬೇರೆ ಮಕ್ಕಳೂ ಇಂಥದ್ದೇ ಸ್ಥಿತಿಯಲ್ಲಿರುತ್ತಾರೆ. ಅವರು ಕೂಡ ಆಟವಾಡಲು ಅಥವಾ ಶಾಲೆಗೆ ಹೋಗಲು ಇಲ್ಲವೇ ಮಾರುಕಟ್ಟೆಗೆ ತೆರಳಲು ಹೊರಗೆ ಕಾಲಿಡುತ್ತಿಲ್ಲ ಎನ್ನುವ ವಾಸ್ತವಾಂಶದ ಅರಿವು ಮಕ್ಕಳಲ್ಲಿ ಒಂದಿಷ್ಟು ಆಶಾಭಾವ ಮೂಡಿಸುತ್ತದೆ.

ಕರೋನಾ ಸ್ಟೋರಿ: ಐ ಆಮ್ ರಹಿನೋಸ್ ಬ್ರದರ್. ಲೇಖಕ– ಓಂಪ್ರಕಾಶ್ ಕ್ಷತ್ರಿಯ 'ಪ್ರಕಾಶ್', ಚಿತ್ರಗಳು–ಫಲೋರಿಯಾನಾ ಗಿಯೊಟ್ಟಾ ಇನ್ನಿತರರು ಲಿಂಕ್: https://storyweaver.org.in/stories/123427-corona-story-i-am-rahino-s-brother
ಶೀತ ಹಾಗೂ ಕರೋನಾಕ್ಕೆ ಹೇಗೆ ವೈರಸ್ ಕಾರಣವಾಗಬಹುದು ಎಂಬುದನ್ನು ವಿವರಿಸಲು ಮಗು ಮತ್ತು ಕರೋನಾ ವೈರಸ್ ನಡುವಿನ ಸಂಭಾಷಣೆಯನ್ನು ಬಳಸಿಕೊಳ್ಳಲಾಗಿದೆ. ಕೈಗಳನ್ನು ತೊಳೆದುಕೊಳ್ಳುವುದರಿಂದ ಹೇಗೆ ಸೋಂಕಿನಿಂದ ರಕ್ಷಿಸಿಕೊಳ್ಳಬಹುದು ಎಂಬುದನ್ನು ತಾರ್ಕಿಕವಾಗಿ ವಿವರಿಸಲಾಗಿದೆ. ಆದರೆ, ಈ ಕತೆಯ ಗುರಿ ಸ್ವಲ್ಪ ಮಟ್ಟಿನ ವಿಜ್ಞಾನದ ಜ್ಞಾನ ಇರುವ ಮಕ್ಕಳು. ಏಕೆಂದರೆ, ಕಣಗಳು, ಜಲಜನಕದ ಬಾಂಬ್ ರಚನೆಯನ್ನು ಉಲ್ಲೇಖಿಸುವುದರಿಂದ, ಧ್ವನಿ ಮತ್ತು ವಿವರಣೆಗೆ ಸಂಬಂಧಿಸಿದಂತೆ ಸಣ್ಣ ಮಕ್ಕಳು ಇದನ್ನು ಗ್ರಹಿಸಲಾರರು ಹಾಗೂ ದೊಡ್ಡ ಮಕ್ಕಳಿಗೆ ಇದು ತೀರಾ ಸರಳ ಎನ್ನಿಸುತ್ತದೆ.
ಇಂಗ್ಲಿಷ್‌ನಿಂದ ಸ್ಥಳೀಯ ಭಾಷೆಗಳಿಗೆ ಅನುವಾದಿಸಿದಾಗ, ಸರಿಯಾದ ಪದ ಮತ್ತು ಧ್ವನಿಸಂಬಂಧಿ ಸ್ವರಗಳನ್ನು ಬಳಸಬೇಕಾಗುತ್ತದೆ. ಹೀಗಾಗಿ, ಇಂಗ್ಲಿಷ್‌ನ "ರಿನೋವೈರಸ್' ಹಿಂದಿಯಲ್ಲಿ "ರಹಿನೋ" ಎಂದು ಭಾವಾನುವಾದ ಆಗಬಾರದು.

ಯು ಕ್ಯಾನ್ ಮೇಕ್ ದ ಚೇಂಜ್: ಬ್ರೇಕ್ ದ ಚೈನ್ ಆಫ್ ಕರೋನಾ. ಲೇಖಕ– ರಿದ್ಧನಾಥ್, ಚಿತ್ರಗಳು– ಖುಷ್ಬುವಾಲಾ ಮತ್ತು ಲೋವ್ರಿಸಾ ಚ್ಲೌ. ಲಿಂಕ್:. https://storyweaver.org.in/stories/124803-you-can-meke-the-change-break-the-chain-of-corona
ವೈರಸ್ ಹೇಗೆ ಹರಡುತ್ತದೆ ಎಂಬುದರ ವಾಸ್ತವಿಕ ಚಿತ್ರಣ. ಇದು ಮಕ್ಕಳ ಮನಸ್ಸಿನಲ್ಲಿ ಶಿಷ್ಟಾಚಾರವನ್ನು ಸ್ಪಷ್ಟವಾಗಿ ಹಾಗೂ ಸಂಕ್ಷಿಪ್ತವಾಗಿ ಭದ್ರಪಡಿಸುತ್ತದೆ.

ಎ ಲೆಟರ್ ಫಾರ್ ಅಮ್ಮಾ. ಬರಹ ಮತ್ತು ಚಿತ್ರಗಳು–ರಮ್ಯ ಐಯ್ಯರ್. ಆನ್‌ಲೈನ್: https://storyweaver.org.in/stories/132886-a-letter-for-amma

9 ವರ್ಷದ ಮಗು ಮನೆಯಿಂದ ಹೊರಗಿರುವ ನರ್ಸ್ ವೃತ್ತಿಯಲ್ಲಿರುವ ತಾಯಿಗೆ ಪತ್ರ ಬರೆಯುತ್ತಾನೆ. ಈ ಕತೆಯು ಕೋವಿಡ್ ಪರಿಹಾರ ಕಾರ್ಯಗಳಲ್ಲಿ ತೊಡಗಿಸಿಕೊಂಡವರ ಕುಟುಂಬದ ಸದಸ್ಯರ ಮಕ್ಕಳು ತಮ್ಮ ಮನಸ್ಸನ್ನು ಬಿಚ್ಚಿಡಲು ಹಾಗೂ ಆತಂಕವನ್ನು ಅಭಿವ್ಯಕ್ತಿಸಲು ನೆರವಾಗುತ್ತದೆ. ಪ್ರೀತಿಪಾತ್ರರು ತೊಡಗಿಸಿಕೊಂಡ ಕಾರ್ಯಗಳ ಮೌಲ್ಯವನ್ನು ಮಕ್ಕಳಿಗೆ ತಿಳಿಸಲು ಶಿಕ್ಷಕರು ನೆರವಾಗಬಹುದು.

ಎ ಗ್ರೂಪ್ ಆಫ್ ವಿಲೇಜರ್ಸ್ ಸಿಟ್ಟಿಂಗ್ ಅಂಡರ್ ಎ ಬನ್ಯನ್ ಟ್ರೀ. ಲೇಖಕರು–ಎಸ್ಟೆಲ್ಲಾ ರಾಡ್ರಿಗಸ್, ಚಿತ್ರಗಳು: ಪ್ರಶಾಂತ್‌ಕುಮಾರ್ ಸಿಂಗ್ ಮತ್ತಿತರರು. ಲಿಂಕ್: https://storyweaver.org.in/stories/257966-a-group-of-villagers-sitting-under-a-banyan-tree

ನಗರಗಳಿಂದ ಹಳ್ಳಿಗೆ ವಾಪಸ್ಸಾದ ಕೆಲಸಗಾರರಿಗೆ ಸ್ಥಳಾವಕಾಶ ನೀಡಲು ಗ್ರಾಮಸ್ಥರು ಒಟ್ಟಾಗಿ ಹೇಗೆ ಮಾರ್ಗವೊಂದನ್ನು ಕಂಡುಕೊಂಡರು ಎನ್ನುವುದು ಕತೆಯ ತಿರುಳು. ನಗರಗಳಿಂದ ಗ್ರಾಮಕ್ಕೆ ವಾಪಸ್ಸಾದವರು ಸೋಂಕು ಪೀಡಿತರಾಗಿರಬಹುದು ಎಂಬ ಭಯ ನಿಜವಾದ ಕಾರಣವಾದರೂ, ಈ ಕತೆಯು ಮಕ್ಕಳು ಪರಿಸ್ಥಿತಿಯನ್ನು ತಾರ್ಕಿಕವಾಗಿ ನೋಡಲು ಮತ್ತು ಕ್ವಾರಂಟೈನ್ ಅಥವಾ ಪ್ರತ್ಯೇಕಿಸುವಿಕೆಯ ಅಗತ್ಯವನ್ನು ಅರ್ಥ ಮಾಡಿಕೊಳ್ಳಲು ನೆರವಾಗುತ್ತದೆ. ಪೋಷಕರು ಕೋವಿಡ್ ಪಾಸಿಟಿವ್ ಜನರ ಬಗ್ಗೆ ಆಧಾರರಹಿತ ಪಕ್ಷಪಾತ ಪ್ರವೃತ್ತಿ ತೋರಿಸಿದರೆ, ಮಕ್ಕಳು ಅವರನ್ನು ಪ್ರಶ್ನಿಸುವಂತೆ ಮಾಡಲು ನೆರವಾಗಲಿದೆ.

*** ಮೇಯೋ ಕ್ಲಿನಿಕ್: ಹೌ ಟು ಟಾಕ್ ಟು ಯುವರ್ ಕಿಡ್ಸ್ ಎಬೌಟ್ ಕೋವಿಡ್–19.**

ಪೋಷಕರು ಮತ್ತು ಶಿಕ್ಷಕರು ಸಾಂಕ್ರಾಮಿಕ ಹಾಗೂ ಅದರ ಪರಿಣಾಮ ಕುರಿತು ಮಾತನಾಡಲು ಈ ಸಂಪನ್ಮೂಲ ಹೊತ್ತಗೆಯನ್ನು ಬಳಸಬಹುದು. ಅದು ಒದಗಿಸುವಂತಹ ಕಾರ್ಯತಂತ್ರಗಳು ಮಕ್ಕಳಿಗೆ ಆತಂಕ ಮತ್ತು ಒತ್ತಡವನ್ನು ನಿರ್ವಹಿಸಲು ನೆರವಾಗುತ್ತವೆ. ಕೊನೆಯಲ್ಲಿ ಒಂದುವಿಡಿಯೋದಲ್ಲಿ, ಒಂದು ವೇಳೆ ಅಗತ್ಯ ಬಿದ್ದಲ್ಲಿ ಪರೀಕ್ಷೆಗೆ ಹೇಗೆ ಮೂಗಿನ ದ್ರವವನ್ನು ಸಂಗ್ರಹಿಸಲಾಗುತ್ತದೆ ಎಂಬುದರ ವಿವರವಿದೆ. ಮಕ್ಕಳು ಇದರಿಂದ ಆತಂಕಗೊಳ್ಳಬಾರದು ಎಂದು ತಿಳಿಸುತ್ತದೆ.

ಲಿಂಕ್: https://www.mayoclinic.org/diseases conditions/coronavirus/in-deapth/kids-covid-19/art-2048208

*** ಯುನಿಸೆಫ್: ಹೌ ಟೀಚರ್ಸ್ ಕ್ಯಾನ್ ಟಾಕ್ ಟು ಚಿಲ್ಡ್ರನ್ ಎಬೌಟ್ ಕರೋನಾ ವೈರಸ್ ಡಿಸೀಸ್**

ಪ್ರತಿಯೊಂದು ವಯಸ್ಸು/ಹಂತದ ಮಕ್ಕಳಿಗೆ ಅಗತ್ಯವಾದ ವಿವರಗಳ ಚರ್ಚೆ ಇಲ್ಲಿದೆ. ಶಿಕ್ಷಕರು ಇದರಲ್ಲಿ ಇರುವ ಮಾಹಿತಿಯನ್ನು ತಮ್ಮ ವಿದ್ಯಾರ್ಥಿಗಳ ಅಗತ್ಯಗಳು ಹಾಗೂ ಸನ್ನಿವೇಶಗಳಿಗೆ ಅನ್ವಯಿಸಿ ಬಳಸಬೇಕು.

ಲಿಂಕ್: https://www.unicef.org/coronavirus/how-teachers-can-talk-children-about-cioronavirus-disease-covid-19

* **ಕರೋನಾ ವೈರಸ್: ಎ ಬುಕ್ ಫಾರ್ ಚಿಲ್ಡ್ರನ್**. ಪ್ರಕಟಣೆ– ನೋಸಿ ಕ್ರೋ, ಲೇಖಕರು– ಎಲಿಜಬೆತ್ ಜೆನ್ನರ್, ಕೇಟ್ ವಿಲ್ಸನ್ ಮತ್ತು ನಿಯಾ ರಾಬರ್ಟ್ಸ್, ಚಿತ್ರಗಳು– ಅಕ್ಸೆಲ್ ಶೆಫ್ಲರ್, ವಾಚನ– ಹೂಗ್ ಬೋನ್‌ವಿಲ್.

ಬ್ರಿಟನ್‌ನ ಮಕ್ಕಳ ಪುಸ್ತಕ ಪ್ರಕಾಶನ ಸಂಸ್ಥೆ ನೋಸಿ ಕ್ರೋ, ಯುಟ್ಯೂಬ್‌ನಲ್ಲಿ ಶುಲ್ಕರಹಿತ ಆಡಿಯೋ ಬುಕ್ ಅಳವಡಿಸಿದ್ದು, ಅದು ಮಕ್ಕಳಿಕೆ ಕರೋನಾ ವೈರಸ್ ಕುರಿತ ಸಮಗ್ರ ವಿವರ ನೀಡುತ್ತದೆ. ಕೋವಿಡ್ ಶಿಷ್ಟಾಚಾರಗಳನ್ನು ಪಾಲಿಸಿದರೆ, ನಾವು ವೈರಸ್‌ನ್ನು ಜಯಿಸುತ್ತೇವೆ ಮತ್ತು ಈ ಸಂಕಷ್ಟದ ಕಾಲಕ್ಕೆ ವಿದಾಯ ಹೇಳುತ್ತೇವೆ ಎಂಬ ಸಕಾರಾತ್ಮಕ ಸಂದೇಶದೊಂದಿಗೆ ವಿಡಿಯೋ ಮುಕ್ತಾಯಗೊಳ್ಳುತ್ತದೆ. ಲಿಂಕ್: https://utube/fCjD09SskQU

* **ಕಿಡ್ಸ್, ವಾಯು ಆಂಡ್ ಕರೋನಾ: ಹು ವಿನ್ಸ್ ದ ಫೈಟ್**. ಪ್ರಕಟಣೆ– ಭಾರತ ಸರ್ಕಾರದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಮಂತ್ರಾಲಯ, ಲೇಖಕರು– ರವೀಂದ್ರ ಖೈವಾರ್ ಮತ್ತು ಸುಮನ್ ಮೋರ್.

ವಾಯು ಎಂದು ಕರೆಯಲ್ಪಡುವ ಸೂಪರ್ ಹೀರೋ ಜೊತೆಗೆ ಭಾರತೀಯ ಮಕ್ಕಳಿಗಾಗಿ ಒಂದು ಕಾಮಿಕ್ ಪುಸ್ತಕ, ಈ ಪುಸ್ತಕವನ್ನು ಕರೋನಾ ವೈರಸ್ ಬಗ್ಗೆ ಮಕ್ಕಳಿಗೆ ಮಾಹಿತಿ/ಶಿಕ್ಷಣ ನೀಡಲು ಪ್ರಕಟಿಸಲಾಗಿದೆ. ಕಾಯಿಲೆ ಬಗ್ಗೆ ಜಾಗೃತಿ ಮೂಡಿಸುವುದಲ್ಲದೆ, ಸುರಕ್ಷಿತವಾಗಿರುವುದು ಹೇಗೆ ಎಂದು ಮಕ್ಕಳಿಗೆ ತಿಳಿಸುತ್ತದೆ. ಉತ್ತಮ ಉದ್ದೇಶ ಹಾಗೂ ಸಮರ್ಥವಾಗಿ ಯೋಜಿಸಿದ್ದರೂ, ತರಾತುರಿಯಲ್ಲಿ ಪ್ರಕಟಿಸಿರುವುದರಿಂದ, ಹಲವು ತಪ್ಪುಗಳು ಉಳಿದುಕೊಂಡಿವೆ. ಸೂಪರ್ ಹೀರೋನ ಮೇಲಂಗಿಯು ಕೊನೆಯ ಪುಟಕ್ಕಿಂತ ಮೊದಲಿನ ಪುಟದಲ್ಲಿ ಹೇಗೆ ಕಣ್ಮರೆಯಾಗುತ್ತದೆ ಮತ್ತು ಆತ ಏಕೆ ಕೆಲವೊಮ್ಮೆ ವಾಚ್ಯವಾಗಿ ಹಾಗೂ ಮತ್ತೆ ಕೆಲವೊಮ್ಮೆ ಮನಸ್ಸಿನಲ್ಲೇ ಮಾತನ್ನಾಡುತ್ತಾನೆ ಎಂದು ನೀವು ಆಶ್ಚರ್ಯಪಡಬಹುದು! ಆದರೆ, ಈ ಎಲ್ಲಾ ದೋಷಗಳ ನಡುವೆಯೂ ಸೂಪರ್ ಹೀರೋ ಕಲ್ಪನೆಯಿಂದ ಉತ್ತೇಜಿತರಾಗುವ ಸಣ್ಣ ಮಕ್ಕಳೊಡನೆ ಮಾತುಕತೆ ಆರಂಭಿಸಲು ಇದು ಉತ್ತಮ ಸಂವಾದವಾಗಿದೆ.

ಪಿಡಿಎಫ್: https://online.ndmc.gov.in/covid19/images/corona-comic.pdf

............

ಶೆಫಾಲಿ ತ್ರಿಪಾಠಿ ಮೆಹ್ತಾ, ಅವರು ಲರ್ನಿಂಗ್ ಕರ್ವ್‌ನ ಸಹಸಂಪಾದಕಿಯಾಗಿದ್ದಾರೆ. ಇವರು ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾನಿಲಯದಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ.

ಇವರನ್ನು shefali.mehta@apu.edu.in ಇಮೇಲ್ ಐಡಿಯಲ್ಲಿ ಸಂಪರ್ಕಿಸಬಹುದು